## ಕರ್ನಾಟಕ ವಿಧಾನ ಪರಿಷತ್ತು

**01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1503**
**02. ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)**
**03. ಉತ್ತರಿಸುವ ದಿನಾಂಕ : 10-03-2022.**
**04. ಉತ್ತರಿಸುವ ಸಚಿವರು : ಗೃಹ ಸಚಿವರು.**

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಹೆಮ್ಮರಗಾಲ ಗ್ರಾಮದ ಸರ್ಕಾರಿ ಪ್ರೌಢ ಶಾಲೆಯ 16ನೇ ವಯಸ್ಸಿನ ವಿದ್ಯಾರ್ಥಿ ಹಳೆಪುರ ಕೆರೆಯಲ್ಲಿ ಮುಳುಗಿ ಅನುಮಾನಾಸ್ಪದವಾಗಿ ಸಾವನ್ನಪ್ಪಿದ್ದು. ಈ ಸಂಬಂಧ ದೊಡ್ಡ ಕವಲಂದೆ ಆರಕ್ಷಕ ಠಾಣೆಯಲ್ಲಿ ದೂರು ದಾಖಲಾಗಿದೆಯೇ: | ಹೌದು<br>ಕವಲಂದೆ ಪೊಲೀಸ್ ಠಾಣಾ ಮೊ.ನಂ 01/2022, ಕಲಂ: 302 ರೆ/ವಿ 149 ಐಪಿಸಿ. ರೀತ್ಯಾ ಪ್ರಕರಣವು ದಿನಾಂಕ:03.01.2022 ರಂದು ದಾಖಲಾಗಿರುತ್ತದೆ. |
| ಆ) | ಸದರಿ ವಿದ್ಯಾರ್ಥಿಯು ಕೆಲವು ವ್ಯಕ್ತಿಗಳ ವಾಮಾಚಾರದಿಂದ ಸಾವನ್ನಪ್ಪಿರುವುದಾಗಿ ಪತ್ರಿಕೆಗಳಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು |
| ಇ) | ಸದರಿ ಪ್ರಕರಣದ ಸಂಬಂಧ ಇದುವರೆವಿಗೆ ಎಷ್ಟು ಆರೋಪಿತರನ್ನು ಪತ್ತೆ ಹಚ್ಚಲಾಗಿದೆ: | ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಕವಲಂದೆ ಪೊಲೀಸ್ ಠಾಣೆಯಲ್ಲಿ ವರದಿಯಾಗಿರುವ ಮೊ.ನಂ. 01/2022, ಕಲಂ: 302 ರೆ/ವಿ 149 ಐ.ಪಿ.ಸಿ. ಪ್ರಕರಣದಲ್ಲಿ ಒಟ್ಟು 7 ಜನ ಆರೋಪಿತರಿದ್ದು, ಎಲ್ಲರನ್ನೂ ಪತ್ತೆಹಚ್ಚಿ ದಸ್ತಗಿರಿ ಮಾಡಲಾಗಿರುತ್ತದೆ.ಈ ಪೈಕಿ 5 ಜನ ವಯಸ್ಕರು & ಇಬ್ಬರು ಬಾಲಕರಾಗಿರುತ್ತಾರೆ. |
| ಈ) | ಸದರಿ ಪ್ರಕರಣದ ತನಿಖೆ ಯಾವ ಹಂತದಲ್ಲಿದೆ? | ಸದರಿ ಪ್ರಕರಣವು ಇದೀಗ ಶವಪರೀಕ್ಷೆ ನಡೆಸಿದ ವೈದ್ಯಾಧಿಕಾರಿಯವರಿಂದ ಅಂತಿಮ ಅಭಿಪ್ರಾಯ ಪಡೆಯಬೇಕಾಗಿದ್ದು ಮತ್ತು ಕೃತ್ಯ ನಡೆದ ಸ್ಥಳದ ಕಚ್ಚಾ ನಕ್ಷೆಯನ್ನು ಲೋಕೋಪಯೋಗಿ ಇಲಾಖೆಯಿಂದ ಪಡೆಯಬೇಕಾಗಿದ್ದು ಪ್ರಕರಣವು ತನಿಖಾ ಹಂತದಲ್ಲಿರುತ್ತದೆ. |

**ಕಡತ ಸಂಖ್ಯೆ : ಹೆಚ್‌ಡಿ 21 ಪಿಸಿಕ್ಯೂ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು